1



# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** : 778+842

**ಸದಸ್ಯರ ಹೆಸರು** : 1) ಶ್ರೀ ಬಿ ಕೆ ಹರಿಪ್ರಸಾದ್,
(ವಿಧಾನಸಭೆಯಿಂದ ಚುನಾಯಿತರಾದವರು
2) ಶ್ರೀ ಆಯನೂರು ಮಂಜುನಾಥ್,
(ಪದವೀಧರರ ಕ್ಷೇತ್ರ)

**ಉತ್ತರಿಸುವ ದಿನಾಂಕ** : 20.12.2021

**ಉತ್ತರಿಸುವವರು** : ಅರಣ್ಯ ಹಾಗೂ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸರ್ಕಾರದ ಆದೇಶ ಸಂಖ್ಯೆ: ಅಪಸ/217/ಅಪಸೇ/2014; ದಿನಾಂಕ:23-12-2017 ರಲ್ಲಿನ ಆದೇಶದಂತೆ ಅರಣ್ಯ ಇಲಾಖೆಯ ವಿವಿಧ ವೃಂದಗಳಿಗೆ 3085 ಹುದ್ದೆಗಳನ್ನು ಸೃಜನೆ ಮಾಡಿ ವೃಂದ ಬಲಕ್ಕೆ ಸೇರಿಸಲಾಗಿದ್ದು, ಸೇರಿಸುವ ಪೂರ್ವದಲ್ಲಿ ಕರ್ನಾಟಕ ರಾಜ್ಯ ಸಿವಿಲ್ ಸೇವೆ ಅಧಿನಿಯಮ 1978ರ ಸೆಕ್ಷನ್ 3 ಮತ್ತು 8 ರನ್ವಯ ರಾಜ್ಯ ವಿಧಾನ ಮಂಡಲದ ಅನುಮೋದನೆ ಕಡ್ಡಾಯವಾಗಿದ್ದು, ಈ ಕ್ರಮವನ್ನು ಅನುಸರಿಸದೇ ನೇರವಾಗಿ ವೃಂದಬಲಕ್ಕೆ 3085 ಹುದ್ದೆಗಳನ್ನು ಸೇರಿಸುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಕರ್ನಾಟಕ ರಾಜ್ಯ ನಾಗರಿಕ ಸೇವಾ ಅಧಿನಿಯಮ 1978 ಜಾರಿಗೆ ಬಂದ ನಂತರ ಸದರಿ ಅಧಿನಿಯಮದಡಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸಿ ಅರಣ್ಯ ಇಲಾಖೆಯಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸಿ ಈಗಾಗಲೇ ಪ್ರಕಟಿಸಲಾಗಿದ್ದು, ಅವುಗಳನ್ನು ಕಾಲಕಾಲಕ್ಕೆ ಪರಿಷ್ಕರಿಸಿ, ಅಧಿಸೂಚನೆಗಳನ್ನು ಹೊರಡಿಸಲಾಗಿದೆ.<br><br>ಕರ್ನಾಟಕ ರಾಜ್ಯ ಅರಣ್ಯ ಇಲಾಖೆಯಲ್ಲಿ ಆರ್ಥಿಕ ಇಲಾಖೆಯ ಸಹಮತಿ ಮೇರೆಗೆ 3085 ವಿವಿಧ ವೃಂದಗಳ ಹುದ್ದೆಗಳನ್ನು ಸರ್ಕಾರದ ಆದೇಶ ಸಂಖ್ಯೆ: ಅಪಜೀ 217 ಅಪಸೇ 2014, ದಿನಾಂಕ: 09-05-2019 ರನ್ವಯ ಸೃಜಿಸಲಾಗಿದೆ. |
| ಆ) | ಮೇಲಿನ ಆದೇಶದಂತೆ ಸೃಜನೆಯಾಗಿರುವ ಹೊಸ ಹುದ್ದೆಗಳನ್ನು ಅರಣ್ಯ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ತಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆಯೇ; ಪ್ರಕಟಿಸಿದ್ದಲ್ಲಿ, ಸಂಪೂರ್ಣ ಮಾಹಿತಿ ಒದಗಿಸುವುದು; | ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 140 ಸೇನೀಇ 2010, ದಿನಾಂಕ: 07-04-2011 ರಲ್ಲಿ ಕರ್ನಾಟಕ ರಾಜ್ಯ ನಾಗರಿಕ ಸೇವಾ ಅಧಿನಿಯಮ 1978 ಕ್ಕೆ ತಿದ್ದುಪಡಿ ಮಾಡಿ ದಿನಾಂಕ: 06-05-2010 ರಂದು ಅಧಿಸೂಚನೆ ಹೊರಡಿಸಲಾಗಿದೆ ಎಂದು ಉಲ್ಲೇಖಿಸಲಾಗಿದ್ದು, ಅದರನ್ವಯ ಸರ್ಕಾರದ ಎಲ್ಲಾ ಇಲಾಖೆಗಳಲ್ಲಿ ಹುದ್ದೆಗಳನ್ನು ಸೃಜಿಸುವಾಗ ಮೊದಲಿಗೆ ಪ್ರಸ್ತುತ ಅನುಸರಿಸುತ್ತಿರುವಂತೆ ಒಂದು ಕಾರ್ಯಕಾರಿ ಆದೇಶವನ್ನು ಹೊರಡಿಸುವುದು. ತದನಂತರ ಸೃಜಿಸಲಾದ ಹುದ್ದೆಗಳ ಸಂಖ್ಯೆ, ಸ್ವರೂಪ ಇತ್ಯಾದಿ ಅಂಶಗಳನ್ನು ವೃಂದ ಮತ್ತು ನೇಮಕಾತಿ ನಿಯಮದಲ್ಲಿ ಸೇರಿಸಲು ಒಂದು ಅಧಿಸೂಚನೆಯನ್ನು ಹೊರಡಿಸಬೇಕು. ಇಂತಹ ಅಧಿಸೂಚನೆಯನ್ನು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯಿಂದ ಪರಿಶೋಧಿಸಿಕೊಂಡು ಹೊರಡಿಸಬಹುದಾಗಿರುತ್ತದೆ.<br><br>ಅರಣ್ಯ ಇಲಾಖೆಯಲ್ಲಿ ಯಾವುದೇ ಹೊಸ ವೃಂದದ ಹುದ್ದೆಗಳನ್ನು ಸೃಜಿಸಿಲ್ಲವಾದ್ದರಿಂದ ಮತ್ತು ಇಲಾಖೆಯಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳು ಅಸ್ತಿತ್ವದಲ್ಲಿರುವುದರಿಂದ, ಪುನಃ ನಿಯಮಗಳನ್ನು ರಚಿಸಿ, ಕರ್ನಾಟಕ ರಾಜ್ಯ ನಾಗರಿಕ ಸೇವಾ ಅಧಿನಿಯಮ, 1978ರ |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| | | ಸೆಕ್ಷನ್ 3 ಮತ್ತು 8 ರನ್ವಯ ವಿಧಾನ ಮಂಡಲದ ಉಭಯ ಸದನಗಳಲ್ಲಿ ಮಂಡಿಸುವ ಪ್ರಶ್ನೆ ಉದ್ಭವಿಸುವುದಿಲ್ಲ. ಹೊಸದಾಗಿ ಸೃಜಿಸಲಾಗಿರುವ ವೃಂದಬಲವನ್ನು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸೇರಿಸಲು ಸೂಕ್ತ ಪ್ರಸ್ತಾವನೆಯನ್ನು ಇಲಾಖಾ ಮುಖ್ಯಸ್ಥರಿಂದ ಪಡೆದು ನಿಯಮಾನುಸಾರ ಕ್ರಮವಹಿಸಲಾಗುವುದು. |
| ಇ) | ಅಧಿನಿಯಮ 1978ರ ಸೆಕ್ಷನ್ 3 ಮತ್ತು 8ನ್ನು ಪಾಲಿಸದೇ ಅರಣ್ಯ ಇಲಾಖೆಯು ನಿಯಮ ಬಾಹಿರವಾಗಿ ಹೊಸದಾಗಿ ಸೃಷ್ಟಿಸುವ ಹುದ್ದೆಗಳನ್ನು ನೇರ ಮತ್ತು ಮುಂಬಡ್ತಿಯ ಮೂಲಕ ಭರ್ತಿ ಮಾಡಿ ಅಕ್ರಮವೆಸಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇದಕ್ಕೆ ಕಾರಣವಾದ ಅಧಿಕಾರಿಗಳನ್ನು ಗುರುತಿಸಿ ಯಾವ ಕಾಲಮಿತಿಯೊಳಗೆ ತಪ್ಪಿತಸ್ಥರ ವಿರುದ್ಧ ಕ್ರಮ ಜರುಗಿಸಲಾಗುವುದು; | ಅರಣ್ಯ ಇಲಾಖೆಯಲ್ಲಿ ನಿಯಮಬಾಹಿರವಾಗಿ ಹೊಸದಾಗಿ ಹುದ್ದೆಗಳನ್ನು ಸೃಜಿಸಿರುವುದಿಲ್ಲ. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1998 ವೆಚ್ಚ-5 2017 ದಿನಾಂಕ: 08.12.2017 ರಲ್ಲಿ ನೀಡಿದ ಸಹಮತಿ ಮೇರೆಗೆ ಸರ್ಕಾರದ ಆದೇಶ ಸಂಖ್ಯೆ: ಅಪಜೀ 217 ಅಪಸೇ 2014 ದಿನಾಂಕ: 09.05.2019ರಲ್ಲಿ ಈಗಾಗಲೇ ಹಂಚಿಕೆ ಮಾಡಲಾದ ಹುದ್ದೆಗಳಿಗೆ ನೇರ ನೇಮಕಾತಿ ಕೋಟಾದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಅರಣ್ಯ ರಕ್ಷಕ ವೃಂದದ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ ಹಾಗೂ ಮುಂಬಡ್ತಿ ಕೋಟಾದಡಿ ಲಭ್ಯವಿರುವ ಹುದ್ದೆಗಳ ಎದುರಾಗಿ ಅರ್ಹತೆ ಮತ್ತು ಜೇಷ್ಠತೆಯ ಆಧಾರದ ಮೇಲೆ ನಿಯಮಾನುಸಾರ ಮುಂಬಡ್ತಿಯನ್ನು ನೀಡಲಾಗಿದೆ. ಈ ಪ್ರಕ್ರಿಯೆಯಲ್ಲಿ ಯಾವುದೇ ಅಕ್ರಮ ವೆಸಗಿರುವುದಿಲ್ಲವಾದ್ದರಿಂದ ಶಿಸ್ತುಕ್ರಮ ಕೈಗೊಳ್ಳುವ ಪ್ರಮೇಯ ಉದ್ಭವಿಸುವುದಿಲ್ಲ. |
| ಈ) | ಪ್ರಸ್ತುತ ಹೊಸದಾಗಿ ಸೃಜನೆಮಾಡಿರುವ 339 ಅರಣ್ಯ ರಕ್ಷಕ ಹುದ್ದೆಗಳನ್ನು ಮೇಲೆ ತಿಳಿಸಿರುವ ನಿಯಮಗಳನ್ನು ಅನುಸರಿಸದೇ ಲೋಪವಾಗಿದ್ದರೂ ಸಹ ಈ ಹುದ್ದೆಗಳಿಗೆ ನೇರ ನೇಮಕಾತಿ ಪ್ರಕ್ರಿಯೆಯನ್ನು ಪ್ರಾರಂಭಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇಂತಹ ದೋಷವುಳ್ಳ ನೇಮಕಾತಿ ಪ್ರಕ್ರಿಯೆಯನ್ನು ತಡೆಯಲು ಸರ್ಕಾರ ಕ್ರಮವಹಿಸುವುದೇ | ಪ್ರಸ್ತುತ ಹೊಸದಾಗಿ 339 ಅರಣ್ಯ ರಕ್ಷಕ ಹುದ್ದೆಗಳನ್ನು ಸೃಜನೆ ಮಾಡಿರುವುದಿಲ್ಲ.<br>ಸರ್ಕಾರದ ಆದೇಶಸಂಖ್ಯೆ: ಅಪಜೀ 217 ಅಪಸೇ 2014 ದಿನಾಂಕ: 09.05.2019 ರನ್ವಯ 2019-20 ನೇ ಸಾಲಿಗೆ ಸೃಜಿಸಿದ 150 ಅರಣ್ಯ ರಕ್ಷಕ ಹುದ್ದೆಗಳನ್ನು ಸಂಬಂಧಿಸಿದ ವೃತ್ತ/ವಿಭಾಗಗಳಿಗೆ ಹಂಚಿಕೆ ಮಾಡಲಾಗಿರುತ್ತದೆ. ಸರ್ಕಾರದ ಪತ್ರಸಂಖ್ಯೆ: ಅಪಜೀ 115 ಅಪಸೇ 2016, ದಿನಾಂಕ: 08.11.2016 ರಲ್ಲಿ 119 ಅರಣ್ಯ ರಕ್ಷಕ ಹುದ್ದೆಗಳನ್ನು ಭರ್ತಿ ಮಾಡಲು ನೀಡಿರುವ ಅನುಮತಿಯಂತೆ ಹಾಗೂ ನೇಮಕಾತಿ ಅಧಿಸೂಚನ ಸಂಖ್ಯೆ: ಬಿ6/ನೇಮಕಾತಿ/ವಿವ-1/2016-17 ದಿನಾಂಕ: 10-04-2017 ರನ್ವಯ ಭರ್ತಿಯಾಗದೆ ಬಾಕಿ ಉಳಿದ 12 ಅರಣ್ಯ ರಕ್ಷಕ ಬ್ಯಾಕ್‌ಲಾಗ್ ಹುದ್ದೆಗಳು, ಸರ್ಕಾರದ ಪತ್ರಸಂಖ್ಯೆ: ಅಪಜೀ 284 ಅಪಸೇ 2018 ದಿನಾಂಕ: 20-09-2019 ರಲ್ಲಿ 95 ಅರಣ್ಯ ರಕ್ಷಕ ಹುದ್ದೆಗಳನ್ನು ನೇರನೇಮಕಾತಿ ಮೂಲಕ ಭರ್ತಿಮಾಡಲು ನೀಡಿರುವ ಸಹಮತಿಯಂತೆ ಮತ್ತು ಹೊಸದಾಗಿ ಸೃಜಿಸಲಾದ 150 ಅರಣ್ಯರಕ್ಷಕ ಹುದ್ದೆಗಳ ಪೈಕಿ ನೇರ ನೇಮಕಾತಿಗೆ ಲಭ್ಯವಾಗುವ 113 ಹುದ್ದೆಗಳನ್ನುಳಗೊಂಡಂತೆ ಒಟ್ಟು 339 ಅರಣ್ಯ ರಕ್ಷಕ ಹುದ್ದೆಗಳನ್ನು ನೇರನೇಮಕಾತಿ ಮೂಲಕ ಭರ್ತಿಮಾಡಲು ನೇಮಕಾತಿ ಅಧಿಸೂಚನೆ ಸಂಖ್ಯೆ: ಬಿ6/ನೇಮಕಾತಿ/ವಿವ-1/2019-20 ದಿನಾಂಕ: 02-03-2020 ನ್ನು ಹೊರಡಿಸಲಾಗಿರುತ್ತದೆ.<br>ಈ ನೇರ ನೇಮಕಾತಿ ಪ್ರಕ್ರಿಯೆಯಲ್ಲಿ ಯಾವುದೇ ಲೋಪವಾಗಿಲ್ಲದಿರುವುದರಿಂದ ನೇಮಕಾತಿ ಪ್ರಕ್ರಿಯೆಯನ್ನು ತಡೆಹಿಡಿಯುವ ಪ್ರಶ್ನೆ ಉದ್ಭವಿಸುವುದಿಲ್ಲ. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಉ) | ದಿನಾಂಕ: 23-12-2017 ರ ಆದೇಶದಂತೆ 3085 ಹುದ್ದೆಗಳನ್ನು ಸೃಜನೆ ಮಾಡಿ ಕಳೆದ 5 ವರ್ಷಗಳಲ್ಲಿ ಎಷ್ಟು ಹುದ್ದೆಗಳನ್ನು ಈಗಾಗಲೇ ನೇರ ಮತ್ತು ಮುಂಬಡ್ತಿಯ ಮೂಲಕ ಭರ್ತಿಮಾಡಲಾಗಿದೆ; (ಈ ಕಾರಣದಿಂದ ಸರ್ಕಾರವು ವೇತನಕ್ಕಾಗಿ ಬಿಡುಗಡೆ ಮಾಡಿರುವ ಹೆಚ್ಚುವರಿ ಅನುದಾನದ ಮಾಹಿತಿ ಒದಗಿಸುವುದು) | ಆರ್ಥಿಕ ಇಲಾಖೆಯು ನೀಡಿದ್ದ ಸಹಮತಿಯನ್ವಯ ಒಟ್ಟು 3085 ಹುದ್ದೆಗಳನ್ನು ಸೃಜಿಸಿ ಭರ್ತಿ ಮಾಡಲು ಸರ್ಕಾರದ ಆದೇಶ ಸಂಖ್ಯೆ: ಅಪಜೀ 217 ಅಪಸೇ 2014 ದಿನಾಂಕ: 09-05-2019 ನ್ನು ಹೊರಡಿಸಲಾಗಿದ್ದು, ಈ ರೀತಿ ಸೃಜಿಸಲಾಗಿರುವ ಹುದ್ದೆಗಳ ಪೈಕಿ 2019-20 ನೇ ಸಾಲಿಗೆ ಹಂಚಿಕೆಯಾಗಿರುವ ವಿವಿಧ ವೃಂದದ ಹುದ್ದೆಗಳಲ್ಲಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ರಕ್ಷಕ ವೃಂದದ ನೇರ ನೇಮಕಾತಿ ಪ್ರಕ್ರಿಯೆ ಜಾರಿಯಲ್ಲಿರುತ್ತದೆ. ಇದುವರೆವಿಗೂ ಯಾವುದೇ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಿರುವುದಿಲ್ಲ.<br><br>ಉಳಿದಂತೆ ಮುಂಬಡ್ತಿ ಕೋಟಾದಡಿ ಒಟ್ಟು 69 ವಿವಿಧ ವೃಂದಗಳಲ್ಲಿ ಮುಂಬಡ್ತಿ ನೀಡಲಾಗಿದೆ. ವಿವಿಧ ವೃಂದಗಳಲ್ಲಿ ಹುದ್ದೆಗಳು ಖಾಲಿ ಇರುವುದರಿಂದ, ವೇತನಕ್ಕಾಗಿ ಹೆಚ್ಚುವರಿ ಅನುದಾನದ ಅವಶ್ಯಕತೆ ಇರುವುದಿಲ್ಲ. |

ಸಂಖ್ಯೆ:**ಅಪಜೀ 297 ಅಪಸೇ 2021**

**(ಉಮೇಶ ವಿ. ಕತ್ತಿ)**
ಅರಣ್ಯ ಹಾಗೂ ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು